# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1732

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಕೆ. ಹರೀಶ್ ಕುಮಾರ್
(ವಿಧಾನಸಭಾ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 14.03.2022

ಉತ್ತರಿಸುವ ಸಚಿವರು : ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನಲ್ಲಿ ಮಂಜೂರಾದ ಒಟ್ಟು ಬಿ.ಪಿ.ಎಲ್ ಕಾರ್ಡ್‌ಗಳ ಸಂಖ್ಯೆ ಎಷ್ಟು; | ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನಲ್ಲಿ 47,929 ಆದ್ಯತಾ ಪಡಿತರ ಚೀಟಿಗಳನ್ನು ಮಂಜೂರು ಮಾಡಲಾಗಿದೆ. |
| ಆ | 2018 ರಿಂದ ಮಂಜೂರಾದ ಬಿ.ಪಿ.ಎಲ್. ಕಾರ್ಡುಗಳ ಸಂಖ್ಯೆ ಎಷ್ಟು ಹಾಗೂ 2018 ರಿಂದ ರದ್ದಾದ ಬಿ.ಪಿ.ಎಲ್. ಕಾರ್ಡುಗಳ ಸಂಖ್ಯೆ ಎಷ್ಟು ಹಾಗೂ ರದ್ದಾಗಲು ಕಾರಣವೇನು; | 2018 ರಿಂದ ಮಂಜೂರಾದ ಆದ್ಯತಾ ಪಡಿತರ ಚೀಟಿಗಳ ಸಂಖ್ಯೆ : 11,577.<br>2018 ರಿಂದ ರದ್ದಾದ ಆದ್ಯತಾ ಪಡಿತರ ಚೀಟಿಗಳ ಸಂಖ್ಯೆ : 2,112.<br>ನಿಗದಿಪಡಿಸಲಾಗಿರುವ ಆದ್ಯತಾ ಪಡಿತರ ಚೀಟಿ ಮಾನದಂಡಗಳಿಗೆ ಒಳಪಡದ ಕುಟುಂಬಗಳನ್ನು ಪತ್ತೆಹಚ್ಚಿ ಪಡಿತರ ಚೀಟಿಗಳನ್ನು ರದ್ದುಪಡಿಸಲಾಗಿದೆ. |
| ಇ | ಬಿ.ಪಿ.ಎಲ್. ಕಾರ್ಡ್ ವಿಲೇವಾರಿಗೆ ಬಾಕಿ ಇರುವ ಅರ್ಜಿಗಳ ಸಂಖ್ಯೆ ಎಷ್ಟು; | ಬೆಳ್ತಂಗಡಿ ತಾಲ್ಲೂಕಿನಲ್ಲಿ ವಿಲೇವಾರಿಗೆ 541 ಆದ್ಯತಾ ಪಡಿತರ ಚೀಟಿ ಅರ್ಜಿಗಳು ಬಾಕಿ ಇರುತ್ತವೆ. |
| ಈ | ಬಿ.ಪಿ.ಎಲ್ ಕಾರ್ಡ್‌ನ ಅರ್ಜಿ ವಿಲೇವಾರಿಯನ್ನು ಯಾವ ದಿನಾಂಕದಿಂದ ಸ್ಥಗಿತಗೊಳಿಸಲಾಗಿದೆ; | ಕೋವಿಡ್-19 ಲಾಕ್‌ಡೌನ್ ಅವಧಿಗಳಲ್ಲಿ ಹೊಸ ಪಡಿತರ ಚೀಟಿ ಕೋರಿ ಸಲ್ಲಿಸಿರುವ ಅರ್ಜಿಗಳ ಸ್ಥಳ ಪರಿಶೀಲನೆ ಕಾರ್ಯವು ನಿಧಾನವಾಗಿದ್ದು ಮತ್ತು ಈ ಅವಧಿಯಲ್ಲಿ ಬಯೋಮೆಟ್ರಿಕ್ ಬಳಕೆಯನ್ನು ಹಿಂಪಡೆದಿರುವ ಕಾರಣ ಪಡಿತರ ಚೀಟಿಗಳನ್ನು ವಿತರಿಸುವ ಕಾರ್ಯವನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಲಾಗಿತ್ತು. |

| | | |
|---|---|---|
| ಊ | ಬಿ.ಪಿ.ಎಲ್. ಕಾರ್ಡ್ ವಿತರಣೆ ಮಾಡುವ ಯೋಜನೆ ಸರ್ಕಾರ ಮುಂದಿದೆಯೇ; ಹಾಗಿದ್ದಲ್ಲಿ; ಯಾವಾಗ ವಿತರಣೆ ಮಾಡಲಾಗುವುದು? (ವಿವರ ಒದಗಿಸುವುದು) | ಪ್ರಸ್ತುತ ಹೊಸ ಪಡಿತರ ಚೀಟಿ ವಿತರಿಸುವ ಕಾರ್ಯ ಜಾರಿಯಲ್ಲಿದೆ. ಪಡಿತರ ಚೀಟಿಯನ್ನು ಕೋರಿ ಅರ್ಜಿ ಸಲ್ಲಿಸಿರುವ ಅರ್ಹ ಅರ್ಜಿದಾರರಿಗೆ ಹೊಸ ಪಡಿತರ ಚೀಟಿಯನ್ನು ನೀಡುವ ಕಾರ್ಯ ಜಾರಿಯಲ್ಲಿದ್ದು, ಅರ್ಜಿಗಳ ಹಿರಿತನದ ಮೇಲೆ ಹೊಸ ಆದ್ಯತಾ ಪಡಿತರ ಚೀಟಿಗಳನ್ನು ವಿತರಿಸಲಾಗುತ್ತಿದೆ. |

ಆನಾಸ 57 ಡಿಆರ್‌ಎ 2022 (ಇ-ಆಫೀಸ್)

(ಉಮೇಶ ವಿ. ಕತ್ತಿ)
ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.